# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 513(597) |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ(ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 10.03.2020 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು. |

********

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸಾಮಾನ್ಯ ಸಭೆ ದೀರ್ಘಕಾಲದಿಂದ ನಡೆಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಇದರಿಂದಾಗಿ ಸಾರ್ವಜನಿಕರ ಕೆಲಸ ಕಾರ್ಯಗಳಿಗೆ ಹಾಗೂ ಪ್ರಾಧಿಕಾರ ಪ್ರಗತಿಯ ಕಾರ್ಯಕ್ರಮಗಳಿಗೆ ಅಡ್ಡಿ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ | ದೀರ್ಘಕಾಲದಿಂದ ಸಾಮಾನ್ಯ ಸಭೆ ನಡೆಸದೆ ಇರಲು ಕಾರಣಗಳೇನು; | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ 2019-20ನೇ ಸಾಲಿನ ಪ್ರಥಮ ಸಾಮಾನ್ಯ ಸಭೆಯನ್ನು ದಿನಾಂಕ 10.05.2019 ಮತ್ತು 20.05.2019 ರಂದು ನಡೆಸಲಾಗಿತ್ತು. |
| ಈ | ಯಾವ ಸಮಯದಲ್ಲಿ ಸಾಮಾನ್ಯ ಸಭೆ ನಡೆಸಲಾಗುವುದು? | 2019-20ನೇ ಸಾಲಿನ ದ್ವಿತೀಯ ಸಾಮಾನ್ಯ ಸಭೆಯನ್ನು ದಿನಾಂಕ 06.07.2019 ರಂದು ನಿಗಧಿಪಡಿಸಲಾಗಿತ್ತು. ಸದರಿ ಸಭೆಯನ್ನು ಅನಿವಾರ್ಯ ಕಾರಣಗಳಿಂದ ಮುಂದೂಡಿ ದಿನಾಂಕ 11.07.2019 ರಂದು ನಡೆಸಲು ಮರುನಿಗದಿಪಡಿಸಲಾಗಿತ್ತು.<br><br>ಪ್ರಾಧಿಕಾರದ ಮಾನ್ಯ ಸದಸ್ಯರುಗಳಾದ ಶ್ರೀ ಎಲ್. ನಾಗೇಂದ್ರ, ಶ್ರೀ ಎಸ್.ಎ.ರಾಮದಾಸ್, ಶ್ರೀ ಮರಿತಿಬ್ಬೇಗೌಡ ಮತ್ತು ಶ್ರೀ ಕೆ.ವಿ.ನಾರಾಯಣಸ್ವಾಮಿ ರವರು ಮನವಿ ಸಲ್ಲಿಸಿ, ದಿನಾಂಕ 12.07.2019 ರಂದು ವಿಧಾನ ಮಂಡಲ ಅಧಿವೇಶನ ಪ್ರಾರಂಭವಾಗಲಿದ್ದು, ಅದಕ್ಕೆ ಸಿದ್ಧತೆ ಮಾಡಿಕೊಳ್ಳಬೇಕಾಗಿರುವುದರಿಂದ, ದಿನಾಂಕ 11.07.2019 ರಂದು ನಿಗಧಿಪಡಿಸಿದ್ದ ಸಭೆಯನ್ನು ಮುಂದೂಡುವಂತೆ ಕೋರಿದ್ದರ ಮೇರೆಗೆ ಸದರಿ ಸಭೆಯನ್ನು ದಿನಾಂಕ 29.07.2019 ಕ್ಕೆ ಮುಂದೂಡಲಾಗಿತ್ತು.<br><br>ಈ ಮಧ್ಯೆ ಪ್ರಾಧಿಕಾರದ ಆಯುಕ್ತರನ್ನು ಮುಖ್ಯ ಚುನಾವಣಾಧಿಕಾರಿ, ಕರ್ನಾಟಕ ಇವರು IIDEM Campus ನವದೆಹಲಿಯಲ್ಲಿ ದಿನಾಂಕ 29.07.2019 ಮತ್ತು 30.07.2019 ರಂದು ನಡೆಯುವ National Level Masters Trainers ಕಾರ್ಯಗಾರಕ್ಕೆ ಆಯೋಜಿಸಿದ್ದು, ಸದರಿ ಕಾರ್ಯಾಗಾರಕ್ಕೆ ಆಯುಕ್ತರು ಹಾಜರಿರಬೇಕಾಗಿದ್ದ ಕಾರಣ ಸದರಿ ಸಭೆಯನ್ನು ಮುಂದೂಡಲಾಗಿರುತ್ತದೆ. |

| | | |
|---|---|---|
| | | ಆನಂತರ ವಿಶ್ವ ವಿಖ್ಯಾತ ಮೈಸೂರಿನ ದಸರಾ ಮಹೋತ್ಸವ ಆಚರಣೆಯ ಪೂರ್ವ ತಯಾರಿಯ ಪ್ರಯುಕ್ತ ಪ್ರಾಧಿಕಾರದ ಸಭೆಯನ್ನು ಆಗಸ್ಟ್, ಸೆಪ್ಟಂಬರ್ ಮತ್ತು ಅಕ್ಟೋಬರ್ ಮಾಹೆಯಲ್ಲಿ ನಡೆಸಲು ಸಾಧ್ಯವಾಗಿರುವುದಿಲ್ಲ.<br><br>ಮುಂದೂಡಿದ್ದ ಸದರಿ ಪ್ರಾಧಿಕಾರದ ಸಭೆಯನ್ನು ದಿನಾಂಕ 08.11.2019 ರಂದು ನಡೆಸಲು ತೀರ್ಮಾನಿಸಿ, ದಿನಾಂಕ 30.10.2019 ರಂದು ಸಭಾ ಸೂಚನಾ ಪತ್ರವನ್ನು ಎಲ್ಲಾ ಸದಸ್ಯರಿಗೂ ಹೊರಡಿಸಲಾಗಿತ್ತು. ಅನಿವಾರ್ಯ ಕಾರಣಗಳಿಂದ, ಸದರಿ ಸಭೆಯನ್ನು ಸಹ ಮುಂದೂಡಲಾಗಿರುತ್ತದೆ.<br><br>ಆನಂತರ ಭಾರತೀಯ ಚುನಾವಣಾ ಆಯೋಗವು ಮೈಸೂರು ತಾಲ್ಲೂಕಿನ, ಹುಣಸೂರು ವಿಧಾನ ಸಭಾ ಕ್ಷೇತ್ರದ ಉಪ ಚುನಾವಣೆಯನ್ನು ನಿಗಧಿಪಡಿಸಿ ದಿನಾಂಕ 27.09.2019 ರಂದು ಅಧಿಸೂಚನೆಯನ್ನು ಹೊರಡಿಸಿದ್ದು, ಪ್ರಾಧಿಕಾರದ ಅಧ್ಯಕ್ಷರು ಆದ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ ಇವರು ಹುಣಸೂರು ಉಪ ಚುನಾವಣೆ ಕರ್ತವ್ಯದ ಕಾರ್ಯ ಒತ್ತಡ ಹಾಗೂ ಚುನಾವಣಾ ನೀತಿ ಸಂಹಿತೆ ಜಾರಿ ಇದ್ದುದರಿಂದ ನವೆಂಬರ್ ಮತ್ತು ಡಿಸೆಂಬರ್ ಮಾಹೆಯಲ್ಲಿ ಪ್ರಾಧಿಕಾರದ ಸಾಮಾನ್ಯ ಸಭೆಯನ್ನು ನಡೆಸಲು ಸಾಧ್ಯವಾಗಿರಲಿಲ್ಲ.<br><br>ಮುಂದೂಡಲಾಗಿದ್ದ ಪ್ರಾಧಿಕಾರದ ಸಾಮಾನ್ಯ ಸಭೆಯನ್ನು ದಿನಾಂಕ 07.03.2020 ರಂದು ನಡೆಸಲಾಗಿರುತ್ತದೆ. |

**ಸಂಖ್ಯೆ: ನಅಇ 6 ಎಲ್‌ಸಿಕ್ಯೂ 2020 (ಇ)**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು